ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಭದ್ರಾನದಿಯಲ್ಲಿ ರಾಫ್ಟಿಂಗ್ ನಡೆಸುವುದು

ಶ್ರೀ ಎಸ್. ಎಲ್. ಭೋಜೇಗೌಡ(ಶಿಕ್ಷಕರ ಕ್ಷೇತ್ರ):-

836 (918) ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಚಿಕ್ಕಮಗಳೂರು ಜಿಲ್ಲೆ, ಕಳಸ ವ್ಯಾಪ್ತಿಯ ಭದ್ರಾನದಿಯಲ್ಲಿ ರಾಫ್ಟಿಂಗ್ ನಡೆಸಲು ಟೆಂಡರ್ ನೀಡುವ ಸಂದರ್ಭದಲ್ಲಿ ಅವ್ಯವಹಾರ ಎಸಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಎಷ್ಟು ಮೊತ್ತಕ್ಕೆ ಟೆಂಡರ್ ನೀಡಲಾಗಿತ್ತು ಹಾಗೂ ಇದುವರೆವಿಗೂ ನಿಯಮಾನುಸಾರ ಕಾಲಮಿತಿಯೊಳಗೆ ಬಿಡ್ ಮೊತ್ತವನ್ನು ಟೆಂಡರ್‌ದಾರರು ಪಾವತಿಸಿದ್ದಾರೆಯೇ ; (ವಿವರ ನೀಡುವುದು)

(ಇ) ಟೆಂಡರ್‌ದಾರರು ಪ್ರವಾಸಿಗರ ಸುರಕ್ಷತೆ ನಿಯಮದಂತೆ ಕೈಗೊಳ್ಳಬೇಕಾದ ಮುಂಜಾಗ್ರತೆ ಕ್ರಮಗಳೇನು ; ಇದಕ್ಕಾಗಿ ಯಾವ ನಿಯಮ ಪಾಲಿಸಲಾಗುತ್ತಿದೆ ; (ವಿವರ ನೀಡುವುದು) ಪಾಲಿಸದೆ ಇರುವುದಕ್ಕೆ ಕಾರಣ ಏನು ; ಜರುಗಿಸಲಾಗಿರುವ ಕ್ರಮವೇನು ;

(ಈ) ಟೆಂಡರ್‌ನಲ್ಲಿ ಯಾವ ಷರತ್ತುಗಳನ್ನು ವಿಧಿಸಲಾಗಿತ್ತು ಹಾಗೂ ಅರ್ಹವಿರದ ಸಂಸ್ಥೆಗೆ ಟೆಂಡರ್ ನೀಡಿದವರ ಮೇಲೆ ಕೈಗೊಳ್ಳುವ ಕ್ರಮಗಳೇನು ?